# ಇಸ್ಲಾಮ್ ಧರ್ಮದ ಬಗ್ಗೆ ತಪ್ಪು ಕಲ್ಪನೆಗಳು

## ನಿಜವಾಗಿ ನಿಮಗೇನು ಗೊತ್ತಿದೆ?

الحركة النصيحة الإسلامية
ANNASEEHA ISLAMIC MOVEMENT
Suratkal, Mangalore - 575014
74118 55190 / 97315 93091

## ಪರಿಚಯ

ಇಸ್ಲಾಂ ಜಗತ್ತಿನ ಅತಿದೊಡ್ಡ ಧರ್ಮಗಳಲ್ಲೊಂದು. ಹಾಗೆಯೇ ಅತ್ಯಧಿಕ ತಪ್ಪುಕಲ್ಪನೆಗೊಳಗಾದ ಧರ್ಮ-ಗಳಲ್ಲೂ ಒಂದು. ರಾಜಕೀಯ, ಆರ್ಥಿಕ, ಪೂರ್ವಗ್ರಹ ಪೀಡಿತ ಮಾಧ್ಯಮ ಮುಂತಾದ ಅನೇಕ ಕಾರಣಗ-ಳಿಂದ ಇಸ್ಲಾಂ ಧರ್ಮದ ಬಗ್ಗೆ ತಪ್ಪುಕಲ್ಪನೆಗಳು ವ್ಯಾಪ-ಕವಾಗಿ ಹರಡಿಕೊಂಡಿವೆ. ಇಸ್ಲಾಂ ಮತ್ತು ಮುಸಲ್ಮಾನರ ಬಗ್ಗೆ ಅರಿಯುವ ಸಮರ್ಪಕ ವಿಧಾನ ಯಾವುದೆಂದರೆ ರೂಢ ಮಾದರಿಗಳನ್ನು ತೊರೆದು ಇಸ್ಲಾಂ ಧರ್ಮದ ಪ್ರ-ತಿಯೊಂದು ವಿಷಯದ ಬಗ್ಗೆ ಅಧಿಕೃತ ಮೂಲಗಳಿಂದ ಮಾಹಿತಿ ಪಡೆದುಕೊಳ್ಳುವುದು.

## "ಮುಸಲ್ಮಾನರು ಮುಸ್ಲಿಮೇತರರೊಂದಿಗೆ ಒಳ್ಳೆಯ ಮತ್ತು ಉದಾತ್ತ ಮೌಲ್ಯಗಳನ್ನು ಹಂಚಿ-ಕೊಳ್ಳುವುದಿಲ್ಲವೇ?"

ಇಸ್ಲಾಂ ಧರ್ಮದ ಕೆಲವು ಮೌಲ್ಯಗಳು ಸಭ್ಯ "ಪಾಶ್ಚಾತ್ಯ" ಮೌಲ್ಯಗಳೊಂದಿಗೆ ಹೊಂದಾಣಿಕೆಯಾಗುವುದಿಲ್ಲವೆಂದು ಕೆಲವರು ವಾದಿಸುತ್ತಾರೆ. ಇಂತಹ ವಾದಗಳು ಸತ್ಯಕ್ಕೆ ವಿ-ದೂರವಾಗಿರಲೂಬಹುದು.

> "ನಿಮ್ಮಲ್ಲಿ ಅತ್ಯುತ್ತಮ ಜನರು ಅತ್ಯುತ್ತಮ ಸ್ವಭಾವ ಮತ್ತು ವರ್ತನೆಯನ್ನು ಹೊಂದಿರುವವರು." — ಪ್ರವಾದಿ ಮುಹಮ್ಮದ್ (ಸ)

ಮುಸಲ್ಮಾನರು ಕೆಳಗೆ ಹೇಳಿದ ಉದಾತ್ತ ಮತ್ತು ಸಾರ್ವ-ತ್ರಿಕ ಮೌಲ್ಯಗಳನ್ನು ಪಾಲಿಸುತ್ತಾರೆ:

- ✓ ಪ್ರಾಮಾಣಿಕತೆ ಮತ್ತು ನ್ಯಾಯ
- ✓ ಮಾತು ಪಾಲನೆ

- ✓ ಧಾರ್ಮಿಕ ಸ್ವಾತಂತ್ರ್ಯ ನೀಡುವುದು
- ✓ ತಂದೆ–ತಾಯಿ, ಬಂಧು–ಬಳಗ, ನೆರೆಹೊರೆ ಮತ್ತು ಹಿರಿಯರನ್ನು ಗೌರವಿಸುವುದು
- ✓ ದಾನ–ಧರ್ಮ ಮಾಡುವುದು, ಬಡವರ ಮತ್ತು ನಿ-ರ್ಗತಿಕರ ಆರೈಕೆ ಮಾಡುವುದು
- ✓ ನೆರೆಹೊರೆಯವರ ಬಗ್ಗೆ ಕಾಳಜಿ ವಹಿಸುವುದು
- ✓ ಸುಳ್ಳು, ಮೋಸ, ಆಣೆ ಅಥವಾ ಪರದೂಷಣೆಯನ್ನು ವರ್ಜಿಸುವುದು

ಮುಸಲ್ಮಾನರು ವಿಧ್ಯುಕ್ತವಾಗಿ ಸಮಾಜಕ್ಕೆ ಕೊಡುಗೆ ಸಲ್ಲಿಸಬೇಕು ಮತ್ತು ಸರ್ವೋನ್ನತ ನೈತಿಕ ಮೌಲ್ಯಗಳನ್ನು ಅಳವಡಿಸಿಕೊಂಡು ಅತ್ಯುತ್ತಮ ಕರ್ಮಗಳನ್ನು ಮಾಡ-ಬೇಕೆಂದು ಇಸ್ಲಾಂ ಆವಶ್ಯಪಡುತ್ತದೆ.

## "ಮುಸಲ್ಮಾನರು ಅಲ್ಲಾಹು ಎಂಬ ಹೊಸ ದೇವರನ್ನು ಆರಾಧಿಸುತ್ತಾರೆಯೇ?"

"ಅಲ್ಲಾಹು" ಎಂಬುದು ಸರ್ವಶಕ್ತ ದೇವರು ಎಂಬ ಅರ್ಥವನ್ನು ಹೊಂದಿರುವ ಅರೇಬಿಕ್ ಶಬ್ದವಾಗಿದೆ. ಇದು ಏಕೈಕ ದೇವನನ್ನು ಮಾತ್ರ ಸೂಚಿಸುವ ಒಂದು ಭಾಷಾ ಸಂಪನ್ನ ಶಬ್ದವಾಗಿದ್ದು, ಅರೇಬಿಕ್ ಮಾತನಾಡುವ ಕ್ರೈಸ್ತರು ಮತ್ತು ಯಹೂದರು ಕೂಡ ದೇವರನ್ನು "ಅಲ್ಲಾಹು" ಎಂದೇ ಕರೆಯುತ್ತಾರೆ.

> ನೂಹ್ (ನೋಹ್), ಇಬ್ರಾಹೀಂ (ಅಬ್ರಹಾಂ), ಮೂಸಾ (ಮೋಶೆ) ಮತ್ತು ಯೇಸು ಆರಾಧಿಸಿದ ಅದೇ ದೇವರನ್ನು ಮುಸಲ್ಮಾನರು ಆರಾಧಿಸುತ್ತಾರೆ.

ಮುಸಲ್ಮಾನರು, ಯಹೂದಿಗಳು ಮತ್ತು ಕ್ರೈಸ್ತರು ಒಬ್ಬನೇ ದೇವನನ್ನು (ಸೃಷ್ಟಿಕರ್ತನನ್ನು) ನಂಬುತ್ತಾರಾದರೂ, ದೇವರ ಬಗ್ಗೆ ಅವರ ಕಲ್ಪನೆಗಳು ವಿಭಿನ್ನವಾಗಿವೆ. ಉದಾಹರಣೆಗೆ, ದೇವರಿಗೆ ಸಹಭಾಗಿಗಳಿರುವುದನ್ನು ಅಥವಾ

ಅವನು ತ್ರಿಯೇಕತ್ವದ ಒಂದು ಭಾಗವಾಗಿರುವುದನ್ನು ಮುಸಲ್ಮಾನರು ತಿರಸ್ಕರಿಸುತ್ತಾರೆ.

## "ಇಸ್ಲಾಂ ಭಯೋತ್ಪಾದನೆಗೆ ಅನುಮತಿ ನೀಡುತ್ತದೆಯೇ?"

ಒಬ್ಬ ಮುಸ್ಲಿಂ ಉಗ್ರಗಾಮಿಯನ್ನು—ಆತ ಹೋರಾಡುತ್ತಿರುವುದು ನ್ಯಾಯಕ್ಕೋ ಅಥವಾ ಅನ್ಯಾಯಕ್ಕೋ, ದಬ್ಬಾಳಿಕೆಯ ಪರವೋ ಅಥವಾ ವಿರುದ್ಧವೋ ಎಂದು ಪರಾಂಬರಿಸಿ ನೋಡದೆ ಮಾಧ್ಯಮಗಳು ಅದನ್ನು ದೊಡ್ಡದಾಗಿ ಬಿಂಬಿಸುತ್ತವೆ.

ಯುದ್ಧದ ಸಮಯದಲ್ಲಿ, ಯುದ್ಧ ಮಾಡದ ಅಮಾಯಕ ಜನರನ್ನು ಹತ್ಯೆ ಮಾಡುವುದನ್ನು ಇಸ್ಲಾಂ ಸ್ಪಷ್ಟವಾಗಿ ವಿರೋಧಿಸಿದೆ. ಅಮಾಯಕ ಜನರನ್ನು ಬಿಡಿ, ಯುದ್ಧದ ಸಮಯದಲ್ಲಿ ಮರ–ಗಿಡ, ಪ್ರಾಣಿ–ಪಕ್ಷಿಗಳನ್ನು ಸಹ ಅನಗತ್ಯವಾಗಿ ಸಂಹಾರ ಮಾಡುವುದನ್ನು ಇಸ್ಲಾಂ

ಅನುಮತಿಸುವುದಿಲ್ಲ. ಏನೇ ಆದರೂ ಭಯೋತ್ಪಾದನೆ ಮತ್ತು ಬಾಹ್ಯ ಆಕ್ರಮಣವನ್ನು ನ್ಯಾಯಬದ್ಧವಾಗಿ ಪ್ರತಿರೋಧಿಸುವುದನ್ನು ಬೇರ್ಪಡಿಸಿ ತಿಳಿಯಬೇಕಾದುದು ಅತ್ಯಾವಶ್ಯಕ. ಏಕೆಂದರೆ ಅವೆರಡೂ ಬೇರೆ ಬೇರೆ ವಿಷಯಗಳಾಗಿವೆ.

ಕುರ್‌ಆನ್ ಒಬ್ಬ ಅಮಾಯಕ ವ್ಯಕ್ತಿಯನ್ನು ಅನ್ಯಾಯವಾಗಿ ಕೊಂದರೆ ಉಂಟಾಗುವ ಗಂಭೀರ ಪರಿಣಾಮವನ್ನು ಎಚ್ಚರಿಸುವುದರ ಜೊತೆಗೆ ಮಾನವಜೀವದ ಮೌಲ್ಯವನ್ನು ಎತ್ತಿಹಿಡಿಯುತ್ತದೆ.

“ಒಬ್ಬ ಅಮಾಯಕ ವ್ಯಕ್ತಿಯನ್ನು ಕೊಂದರೆ ಅದು ಸಂಪೂರ್ಣ ಮನುಕುಲವನ್ನು ಕೊಂದಂತೆ. ಒಬ್ಬ ವ್ಯಕ್ತಿಯ ಜೀವವನ್ನು ರಕ್ಷಿಸಿದರೆ ಅದು ಸಂಪೂರ್ಣ ಮನುಕುಲವನ್ನು ರಕ್ಷಿಸಿದಂತೆ.” ಕುರ್‌ಆನ್ 5:32

## “ಇಸ್ಲಾಂ ಮಹಿಳೆಯರ ಮೇಲೆ ದಬ್ಬಾಳಿಕೆ ಮಾಡುತ್ತದೆಯೇ?”

ಇಸ್ಲಾಂ ಧರ್ಮದ ಪ್ರಕಾರ ದೇವರ ಮುಂದೆ ಗಂಡು ಮತ್ತು ಹೆಣ್ಣು ಸಮಾನರು. ಇಬ್ಬರಿಗೂ ಅವರ ಕರ್ಮಗಳಿಗೆ ಸಮಾನ ಪ್ರತಿಫಲ ಮತ್ತು ಸಮಾನ ವಿಚಾರಣೆಯಿದೆ. ದೇವರ ದೃಷ್ಟಿಯಲ್ಲಿ ಮನುಷ್ಯ ಶ್ರೇಷ್ಠತೆಯ ಮಾನದಂಡ ದೇವಭಕ್ತಿ ಮಾತ್ರವಾಗಿದೆ.

“ನಿಮ್ಮ ಪೈಕಿ ಅತ್ಯಧಿಕ ದೇವಭಕ್ತಿಯುಳ್ಳವನೇ ಅಲ್ಲಾಹನ ದೃಷ್ಟಿಯಲ್ಲಿ ಅತ್ಯಧಿಕ ಗೌರವಾರ್ಹನು.” ಕುರ್‌ಆನ್ 49:13

ಶ್ರೇಷ್ಠತೆ ಮತ್ತು ಸ್ಥಾನಮಾನ ಲಭ್ಯವಾಗುವುದು ಧನಿಕ–ಬಡವ, ಕರಿಯ–ಬಿಳಿಯ, ಗಂಡು–ಹೆಣ್ಣು ಎಂಬ ಶ್ರೇಣಿಯಲ್ಲಿ ಅಲ್ಲ, ಬದಲಾಗಿ ದೇವಭಕ್ತಿ ಮತ್ತು ದೇವನಿಷ್ಠೆಯ ಆಧಾರದಲ್ಲಿ ಎಂದು ಈ ವಚನ ತಿಳಿಸುತ್ತದೆ.

ಮಹಿಳೆಯರಿಗೆ ಉನ್ನತ ಗೌರವಾದರಗಳನ್ನು ನೀಡಲಾಗಿದೆ. ಉದಾಹರಣೆಗೆ, ಸಮಾನ ವೇತನದ ಹಕ್ಕು, ಸಂಗಾತಿಯನ್ನು ಆರಿಸುವ ಹಕ್ಕು, ವಿದ್ಯೆ ಸಂಪಾದಿಸುವ ಹಕ್ಕು, ವಿಚ್ಛೇದನ ಪಡೆಯುವ ಹಕ್ಕು, ಉತ್ತರಾಧಿಕಾರದ ಹಕ್ಕು ಇತ್ಯಾದಿ.

> ಗಂಡು ಮತ್ತು ಹೆಣ್ಣನ್ನು ಸೃಷ್ಟಿಸಿದ ಅಲ್ಲಾಹು ಇಬ್ಬರಿಗೂ ವಿಭಿನ್ನ ಪಾತ್ರಗಳನ್ನು ಮತ್ತು ವಿಭಿನ್ನ ಹೊಣೆಗಾರಿಕೆಗಳನ್ನು ನೀಡಿದ್ದಾನೆ. ಅದರ ಆಧಾರದಲ್ಲೇ ಅವರನ್ನು ವಿಚಾರಣೆ ಮಾಡಲಾಗುತ್ತದೆ.

ದುರದೃಷ್ಟವಶಾತ್ ಕೆಲವು ಮುಸ್ಲಿಂ ಮಹಿಳೆಯರಿಗೆ ಈ ಹಕ್ಕುಗಳನ್ನು ನೀಡದೆ ಸತಾಯಿಸಲಾಗುತ್ತದೆ. ಇದು ಇಸ್ಲಾಮಿನ ತಪ್ಪಲ್ಲ. ಸಮಸ್ಯೆಯೇನೆಂದರೆ, ಕೆಲವು ದೇಶಗಳಲ್ಲಿ ಜನರು ಅಲ್ಲಿಯ ಸಂಪ್ರದಾಯಗಳನ್ನು ಅನುಸರಿಸುತ್ತಾರೆ. ಈ ಸಂಪ್ರದಾಯಗಳಿಗೂ ಇಸ್ಲಾಂ ಧರ್ಮಕ್ಕೂ ಯಾವುದೇ ಸಂಬಂಧವಿರುವುದಿಲ್ಲ.

## "ಕುರ್‌ಆನ್ ಒಂದು ಚರಿತ್ರೆ ಗ್ರಂಥವೇ ಅಥವಾ ಕವನ ಸಂಕಲನವೇ?"

ಪವಿತ್ರ ಕುರ್‌ಆನ್ ಸರ್ವಶಕ್ತ ದೇವನ ವಚನಗಳಾಗಿವೆ. ಅವನು ಅದನ್ನು ಜಿಬ್ರೀಲ್ ಎಂಬ ದೇವದೂತರ ಮೂಲಕ ಮುಹಮ್ಮದ್‌ರಿಗೆ (ಅವರ ಮೇಲೆ ಶಾಂತಿಯಿರಲಿ) ಅವತೀರ್ಣಗೊಳಿಸಿದನು. ಅದು ಸತ್ಯಾಸತ್ಯವನ್ನು ಬೇರ್ಪಡಿಸಿ ತಿಳಿಯುವ ಒರೆಗಲ್ಲು ಮತ್ತು ಸಂಪೂರ್ಣ ಮಾನವಕುಲಕ್ಕೆ ಒಂದು ಮಾರ್ಗದರ್ಶನವಾಗಿದೆ. ಕುರ್‌ಆನ್ ಪೂರ್ವ ತಲೆಮಾರುಗಳ ಮತ್ತು ಪ್ರವಾದಿಗಳ ಚರಿತ್ರೆಯನ್ನು ತಿಳಿಸುತ್ತದೆ. ಅವರ ಅನುಭವಗಳಿಂದ ನಾವು ಪಾಠ ಕಲಿಯುವುದಕ್ಕಾಗಿ. ಅದು ಮುಂದುವರಿದು ಸ್ವಯಂ ನಮ್ಮ ಬಗ್ಗೆ, ನಮ್ಮ ಸೃಷ್ಟಿಕರ್ತನ ಬಗ್ಗೆ, ಜೀವನದ ಉದ್ದೇಶದ ಬಗ್ಗೆ, ಅಲ್ಲಾಹನನ್ನು ಮಾತ್ರ ಆರಾಧಿಸಬೇಕೆಂಬ ಬಗ್ಗೆ ತಿಳಿಸುತ್ತದೆ.

**ಕುರ್‌ಆನ್ ಏನು ಎಂಬುದನ್ನು ಅರಿಯುವ ಅತ್ಯುತ್ತಮ ವಿಧಾನ ಅದನ್ನು ಸ್ವಯಂ ಓದುವುದು**

ದೇವರು ಮನುಷ್ಯನನ್ನು ಸೃಷ್ಟಿಸಿರುವುದು ಉದ್ದೇಶ ರಹಿತವಾಗಿ ಅಲ್ಲ. ಒಬ್ಬ ವ್ಯಕ್ತಿ ತನ್ನ ಬುದ್ಧಿಶಕ್ತಿ, ಇಚ್ಛಾ ಸ್ವಾತಂತ್ರ್ಯ ಮತ್ತು ವಿಚಾರ ಸಾಮರ್ಥ್ಯವನ್ನು ಬಳಸಿ ನಿಜವಾದ ದೇವನನ್ನು ಮತ್ತು ದೇವನ ದೃಷ್ಟಾಂತಗಳನ್ನು ಗುರುತಿಸುವುದರಲ್ಲೇ ಅವನ ಜೀವನ ಪರೀಕ್ಷೆಯು ಅಡಗಿದೆ. ಪವಿತ್ರ ಕುರ್‌ಆನ್ ದೇವನ ಮಹಾ ದೃಷ್ಟಾಂತಗಳಲ್ಲೊಂದಾಗಿದೆ.

ಪವಿತ್ರ ಕುರ್‌ಆನ್ ಅನೇಕ ಪವಾಡಗಳನ್ನು ಒಳಗೊಂಡಿದೆ. ಅದರ ಅಧಿಕೃತತೆಯ ಬಗ್ಗೆ ಸಂಶಯಪಡಲು ನಮಗೆ ಯಾವುದೇ ಕಾರಣಗಳಿಲ್ಲ.

## “ಹಿಜಾಬ್ ದಬ್ಬಾಳಿಕೆಯ ಸಂಕೇತವೇ?”

ಮುಸ್ಲಿಂ ಮಹಿಳೆಯರು ತಮ್ಮ ಅಂಗಾಂಗಗಳು ನಿರ್ದಿಷ್ಟ ಆಪ್ತ ಸಂಬಂಧಿಕರಲ್ಲದ ಅನ್ಯ ಪುರುಷರಿಗೆ ಕಾಣದಂತೆ

ಬಟ್ಟೆಯಿಂದ ಮಾನ್ಯವಾಗಿ ಮುಚ್ಚಬೇಕೆಂದು ಇಸ್ಲಾಂ ಆವಶ್ಯಪಡುತ್ತದೆ. ವಾಸ್ತವದಲ್ಲಿ, ಹಿಜಾಬ್ ಬಾಹ್ಯರೂಪಕ್ಕೆ ಮಾತ್ರ ಸೀಮಿತವಲ್ಲ. ಗೌರವಾರ್ಹ ಮಾತು, ಸಭ್ಯತೆ ಮತ್ತು ಗಂಭೀರ ವರ್ತನೆಯು ಸಹ ಹಿಜಾಬ್ ಆಗಿದೆ.

ಹಿಜಾಬ್ ಧರಿಸುವುದರಿಂದ ಅನೇಕ ಪ್ರಯೋಜನಗಳಿದ್ದರೂ, ಮುಸ್ಲಿಂ ಮಹಿಳೆಯರು ಹಿಜಾಬ್ ಧರಿಸುವ ಮೂಲ ಉದ್ದೇಶ ಅದು ಅಲ್ಲಾಹನ ಆದೇಶ ಎಂಬ ಕಾರಣದಿಂದಾಗಿದೆ. ಏಕೆಂದರೆ ಸೃಷ್ಟಿಗಳಿಗೆ ಯಾವುದು ಒಳ್ಳೆಯದೆಂದು ಸೃಷ್ಟಿಕರ್ತನಿಗೆ ಚೆನ್ನಾಗಿ ಗೊತ್ತಿದೆ.

ಮಹಿಳೆಯ ಪೊಳ್ಳು ಬಾಹ್ಯ ರೂಪಕ್ಕೆ ಒತ್ತುಕೊಡುವ ಬದಲು ಆಕೆಯ ಆಂತರಿಕ ಆಧ್ಯಾತ್ಮಿಕ ಸೌಂದರ್ಯಕ್ಕೆ ಒತ್ತುಕೊಡುವ ಮೂಲಕ ಹಿಜಾಬ್ ಮಹಿಳೆಗೆ ಆತ್ಮಶಕ್ತಿ ನೀಡುತ್ತದೆ. ಸಭ್ಯತೆ ಕಾಪಾಡುತ್ತಲೇ ಸಮಾಜದ ಸಕ್ರಿಯ ಸದಸ್ಯೆಯಾಗುವ ಸ್ವಾತಂತ್ರ್ಯವನ್ನು ಹಿಜಾಬ್ ಮಹಿಳೆಗೆ ನೀಡುತ್ತದೆ.

ಹಿಜಾಬ್ ದಮನ, ದಬ್ಬಾಳಿಕೆ ಅಥವಾ ಮೌನರೋದನದ ಸಂಕೇತವಲ್ಲ. ಬದಲಾಗಿ ಅದು ಅಪಮಾನಕರ ಟೀಕೆ, ಅನಗತ್ಯ ಅಭಿವೃದ್ಧಿ ಮತ್ತು ಯುಕ್ತವಲ್ಲದ ತಾರತಮ್ಯದ ವಿರುದ್ಧ ಮಹಿಳೆಯರನ್ನು ಸಂರಕ್ಷಿಸುವ ಆಯುಧವಾಗಿದೆ. ಆದ್ದರಿಂದ ಮುಂದಿನ ಬಾರಿ ನೀವು ಹಿಜಾಬ್ ಧರಿಸಿದ ಮುಸ್ಲಿಂ ಮಹಿಳೆಯನ್ನು ಕಂಡರೆ, ಆಕೆ ಮುಚ್ಚಿರುವುದು ಆಕೆಯ ದೈಹಿಕ ರೂಪವನ್ನು ಮಾತ್ರವೇ ಹೊರತು ಮನಸ್ಸನ್ನೋ ಬುದ್ಧಿಶಕ್ತಿಯನ್ನೋ ಅಲ್ಲ ಎಂದು ತಿಳಿದುಕೊಳ್ಳಿರಿ.

## "ಮುಸ್ಲಿಮರೆಲ್ಲರೂ ಅರಬ್ಬರೇ?"

ಜಗತ್ತಿನಲ್ಲಿರುವ 20% ಮುಸ್ಲಿಮರು ಮಾತ್ರ ಅರಬ್ಬರು. ಉಳಿದ 80% ಮುಸ್ಲಿಮರು ಅರಬ್ಬರಲ್ಲ. ಉದಾಹರಣೆಗೆ, ಅರಬ್ ಮುಸ್ಲಿಮರಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಇಂಡೋನೇಷಿಯಾ ಮತ್ತು ಭಾರತದಲ್ಲಿ ಮುಸಲ್ಮಾನ-

ರಿದ್ದಾರೆ.

ಜನಾಂಗ, ವರ್ಣದ ಆಧಾರದಲ್ಲಿ ಒಬ್ಬರು ಇನ್ನೊಬ್ಬರಿಗಿಂತ ಶ್ರೇಷ್ಠರೆಂದು ಇಸ್ಲಾಂ ಕಲಿಸುವುದಿಲ್ಲ. ಬದಲಾಗಿ ಜನಾಂಗೀಯವಾದದ ಎಲ್ಲ ರೂಪಗಳನ್ನೂ ಇಸ್ಲಾಂ ವಿರೋಧಿಸುತ್ತದೆ. ಇಸ್ಲಾಂ ಸಂಪೂರ್ಣ ಮನುಕುಲಕ್ಕೆ ಒಂದು ಶಾಂತಿಯ ಸಂದೇಶವಾಗಿದೆ. ಅಂದರೆ ಏಕೈಕ ಸತ್ಯ ದೇವನನ್ನು ಆರಾಧಿಸುವ ಮೂಲಕ ಯಾರಿಗೂ ಸಹ ಶಾಂತಿ ಮತ್ತು ಯಶಸ್ಸನ್ನು ಪಡೆಯಬಹುದೆಂದು ಇಸ್ಲಾಂ ಹೇಳುತ್ತದೆ.

## “ಜಿಹಾದ್ ಎಂದರೆ ಭಯೋತ್ಪಾದನೆಯೇ?”

ಜಿಹಾದ್‌ನ ನಿಜವಾದ ಅರ್ಥ ದೇವನ ಸಂತೃಪ್ತಿ ಪಡೆಯಲು ಧರ್ಮಕ್ಕಾಗಿ ಹೋರಾಡುವುದು ಮತ್ತು ತ್ಯಾಗಮಾಡುವುದು. ಭಾಷಿಕ ಅರ್ಥದಲ್ಲಿ ಜಿಹಾದ್ ಎಂದರೆ “ಹೋರಾಟ”. ಒಬ್ಬ ವ್ಯಕ್ತಿ ದುಷ್ಕರ್ಮಗಳನ್ನು

ತೊರೆಯಲು ಸ್ವಯಂ ತನ್ನ ದೇಹದ ವಿರುದ್ಧ ಹೋರಾಟ ಮಾಡುವುದರಿಂದ ತೊಡಗಿ ಇಸ್ಲಾಮೀ ರಾಷ್ಟ್ರದ ಸೇನೆ-ಯಲ್ಲಿ ಶಸ್ತ್ರಸಜ್ಜಿತವಾಗಿ ಹೋರಾಡುವ ತನಕ ಎಲ್ಲವೂ ಜಿಹಾದ್‌ನಲ್ಲಿ ಒಳಪಡುತ್ತದೆ. ಜಿಹಾದ್‌ನ ಬಹುಮುಖ್ಯ ಅಂಗವು ಸಮಾಜದಲ್ಲಿ ಶಾಂತಿ ನೆಲೆಗೊಳಿಸಲು, ದಬ್ಬಾ-ಳಿಕೆಯನ್ನು ನಿವಾರಿಸಲು ಮತ್ತು ನ್ಯಾಯವನ್ನು ಉತ್ತೇ-ಜಿಸಲು ಹೋರಾಡುವುದಾಗಿದೆ. ಇದು ಸಂದರ್ಭವನ್ನು ಅವಲಂಬಿಸಿ ಒಂದೋ ಆತ್ಮರಕ್ಷಣೆಗಾಗಿರಬಹುದು ಅಥವಾ ಆಕ್ರಮಣಕಾರಿಯಾಗಿರಬಹುದು.

## “ಮುಸಲ್ಮಾನರು ಮುಹಮ್ಮದ್‌ರನ್ನು ಅಥವಾ ಚಂದ್ರ ದೇವರನ್ನು ಆರಾಧಿಸುತ್ತಾರೆಯೇ?”

ಮುಸಲ್ಮಾನರು ಪ್ರವಾದಿ ಮುಹಮ್ಮದ್‌ರನ್ನು (ಅವರ ಮೇಲೆ ಶಾಂತಿಯಿರಲಿ) ಆರಾಧಿಸುತ್ತಾರೆಂದು ಹೇಳುವುದು ತಪ್ಪುಕಲ್ಪನೆಯಾಗಿದೆ. ಇದು ಸಂಪೂರ್ಣ

ಸುಳ್ಳು. ಪ್ರವಾದಿಯವರ (ಅವರ ಮೇಲೆ ಶಾಂತಿಯಿರಲಿ) ಈ ವಚನದಿಂದಲೇ ಇದನ್ನು ಸುಲಭವಾಗಿ ಖಂಡಿಸಬಹುದು. "ಕ್ರೈಸ್ತರು ಮರ್ಯಮರ ಮಗ ಈಸಾರನ್ನು ಹದ್ದುಮೀರಿ ಪ್ರಶಂಸಿಸಿದಂತೆ ನೀವು ನನ್ನನ್ನು ಪ್ರಶಂಸಿಸಬೇಡಿ. ನಾನು ಅಲ್ಲಾಹನ ದಾಸ ಮಾತ್ರವಾಗಿದ್ದೇನೆ. ಆದ್ದರಿಂದ ನೀವು ನನ್ನನ್ನು ಅಲ್ಲಾಹನ ದಾಸ ಮತ್ತು ಸಂದೇಶವಾಹಕ (ಪೈಗಂಬರ) ಎಂದು ಕರೆಯಿರಿ."

> ಎಲ್ಲ ಪ್ರವಾದಿಗಳನ್ನೂ ಗೌರವಿಸಬೇಕೆಂದು ಇಸ್ಲಾಂ ಕಲಿಸುತ್ತದೆ. ಅವರನ್ನು ಗೌರವಿಸುವುದು ಮತ್ತು ಪ್ರೀತಿಸುವುದು ಎಂದರೆ ಅವರನ್ನು ಆರಾಧಿಸುವುದಲ್ಲ.

ಮುಸಲ್ಮಾನರು "ಚಂದ್ರ ದೇವರನ್ನು" ಆರಾಧಿಸುತ್ತಾರೆನ್ನುವುದು ಇನ್ನೊಂದು ತಪ್ಪುಕಲ್ಪನೆಯಾಗಿದೆ. ಚಂದ್ರನನ್ನೋ ಅಥವಾ ಅಲ್ಲಾಹನ ಹೊರತಾದ ಇತರ ಯಾವುದೇ ವಸ್ತುವನ್ನು ಆರಾಧಿಸುವುದನ್ನು ಇಸ್ಲಾಂ ಕಠಿಣವಾಗಿ ನಿಷೇಧಿಸಿದೆ.

“ಸೂರ್ಯನಿಗೋ ಚಂದ್ರನಿಗೋ ಸಾಷ್ಟಾಂಗ ಮಾಡಬೇಡಿ. ಅವುಗಳನ್ನು ಸೃಷ್ಟಿಸಿದ ಅಲ್ಲಾಹನಿಗೆ ಸಾಷ್ಟಾಂಗ ಮಾಡಿರಿ.” ಕುರ್‌ಆನ್ 41:37

ಇಸ್ಲಾಂ ದೇವನ ಸಂಪೂರ್ಣತೆ, ಮಹಾತ್ಮೆ ಮತ್ತು ಅಪ್ಪ-ಟತೆಯನ್ನು ರಾಜಿಯಿಲ್ಲದೆ ಅಂಗೀಕರಿಸುತ್ತದೆ. ದೇವನು ಅತಿದೊಡ್ಡ ನ್ಯಾಯಪಾಲಕ ಮತ್ತು ಅತ್ಯಧಿಕ ಕರುಣಾ-ಮಯಿ. ಅಲ್ಲಾಹನನ್ನು ಮಾತ್ರ ಆರಾಧಿಸುವುದು ಇಸ್ಲಾಂ ಧರ್ಮದ ಬಹುಮುಖ್ಯ ಅಂಗವಾಗಿದೆ. ಕುರ್‌ಆನ್ ಹಲವಾರು ಸ್ಥಳಗಳಲ್ಲಿ ಇದನ್ನು ಪುನರುಚ್ಛರಿಸಿದೆ.

## “ಇಸ್ಲಾಂ ಬಲವಂತದ ಮದುವೆಗೆ ಅನುಮತಿ ನೀಡುತ್ತದೆಯೇ?”

ವ್ಯವಸ್ಥಿತ ವಿವಾಹವು ಜಗತ್ತಿನ ಅನೇಕ ದೇಶಗಳಲ್ಲಿ ಅಸ್ತಿತ್ವದಲ್ಲಿರುವ ಒಂದು ಸಂಪ್ರದಾಯವಾಗಿದೆ. ಈ ವಿವಾಹವು ಮುಸ್ಲಿಮರಿಗೆ ಮಾತ್ರ ಸೀಮಿತವಲ್ಲದಿದ್ದರೂ

ಬಲವಂತದ ವಿವಾಹವನ್ನು ಇಸ್ಲಾಮಿನ ಹೆಸರಿಗೆ ಮಾತ್ರ ಎತ್ತಿಕಟ್ಟಲಾಗುತ್ತದೆ.

> "ಧರ್ಮದಲ್ಲಿ ಯಾವುದೇ ಬಲವಂತವಿಲ್ಲ. ಸತ್ಯವು ಮಿಥ್ಯದಿಂದ ಬೇರ್ಪಟ್ಟು ನಿಂತಿದೆ." ಕುರ್‌ಆನ್ 2:256

ಸಂಭಾವ್ಯ ಸಂಗಾತಿಯನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಪುರುಷರಿಗೂ ಸ್ತ್ರೀಯರಿಗೂ ಇದೆ. ವಿವಾಹಕ್ಕೆ ಮುಂಚೆ ವಧುವಿನ ಅನುಮತಿ ಪಡೆಯದಿದ್ದರೆ ವಿವಾಹ ಸಿಂಧುವಾಗುವುದಿಲ್ಲ.

## "ಜನರು ಮುಸ್ಲಿಮರಾಗಬೇಕೆಂದು ಇಸ್ಲಾಂ ಬಲವಂತಪಡಿಸುತ್ತದೆಯೇ?"

ಇಸ್ಲಾಮಿನ ಸುಂದರ ಸಂದೇಶವನ್ನು ಇತರರಿಗೆ ತಲುಪಿಸುವುದು ಮುಸಲ್ಮಾನರ ಹೊಣೆಯಾಗಿದ್ದರೂ ಸಹ, ಬಲವಂತವನ್ನು ಇಸ್ಲಾಂ ವಿರೋಧಿಸುತ್ತದೆ. ಒಬ್ಬ ವ್ಯಕ್ತಿ ಮುಸ್ಲಿಮನಾಗಬೇಕಾದರೆ ಆತ ಪ್ರಾಮಾಣಿಕವಾಗಿ ಸ್ವ-

ಯಂಪ್ರೇರಣೆಯಿಂದ ವಿಶ್ವಾಸವಿಡಬೇಕು. ಆದ್ದರಿಂದ ಬಲವಂತಪಡಿಸಿ ಮತಾಂತರಗೊಳಿಸುವುದಕ್ಕೆ ಇಸ್ಲಾಮಿನಲ್ಲಿ ಅನುಮತಿಯಿಲ್ಲ.

ಇವುಗಳ ಕಡೆಗೆ ಗಮನಹರಿಸಿ:

- ✓ ಇಂಡೋನೇಷಿಯಾದಲ್ಲಿ ಅತಿದೊಡ್ಡ ಮುಸ್ಲಿಂ ಜನಸಂಖ್ಯೆಯಿದೆ. ಆದರೆ ಇಸ್ಲಾಂ ಅಲ್ಲಿಗೆ ತಲುಪಲು ಯಾವುದೇ ಯುದ್ಧ ಜರುಗಿರಲಿಲ್ಲ.
- ✓ ಅರೇಬಿಯಾದಲ್ಲಿ ತಲೆಮಾರುಗಳಿಂದ 14 ಮಿಲಿಯ ಅರಬ್ ಕೋಪ್ಟಿಕ್ ಕ್ರೈಸ್ತರು ವಾಸಿಸುತ್ತಿದ್ದಾರೆ.
- ✓ ಇಂದು ಪಶ್ಚಿಮದಲ್ಲಿ ಅತಿಶೀಘ್ರ ಬೆಳೆಯುತ್ತಿರುವ ಧರ್ಮಗಳಲ್ಲಿ ಒಂದು ಇಸ್ಲಾಂ ಆಗಿದೆ.
- ✓ ದಬ್ಬಾಳಿಕೆಯ ವಿರುದ್ಧ ಹೋರಾಡುವುದು ಮತ್ತು ನ್ಯಾಯ ಸಂಸ್ಥಾಪನೆ ಮಾಡುವುದು ಜಿಹಾದ್‌ನ ಬಹುಮುಖ್ಯ ಅಂಗಗಳಲ್ಲಿ ಒಂದಾಗಿದ್ದರೂ ಸಹ ಇಸ್ಲಾಂ ಸ್ವೀಕರಿಸಲು ಜನರನ್ನು ಬಲವಂತಪಡಿಸು-

ವುದು ಜಿಹಾದ್‌ನ ಅಂಗವಲ್ಲ.

- ✓ ಮುಸಲ್ಮಾನರು ಸ್ಪೈನ್ ದೇಶವನ್ನು 800 ವರ್ಷ ಆಳಿದರು. ಆದರೂ ಅವರು ಯಾರನ್ನೂ ಮತಾಂತರವಾಗಲು ಬಲವಂತಪಡಿಸಲಿಲ್ಲ.

## ಸಮಾಪ್ತಿ

ಅನಧಿಕೃತ ಮೂಲಗಳಿಂದ ಇಸ್ಲಾಂನ ಬಗ್ಗೆ ಕಲಿಯುವುದು ಅಪಾಯಕಾರಿಯಾಗಿದೆ. ಅದು ತಪ್ಪುಕಲ್ಪನೆಗಳಿಗೆ ದಾರಿ ಮಾಡಿಕೊಡುತ್ತದೆ. ಜಗತ್ತಿನ ನಾಲ್ಕನೆ ಒಂದಂಶ ಜನರು ನಂಬುವ ಇಸ್ಲಾಂ ಧರ್ಮದ ಬಗ್ಗೆ ತಪ್ಪು ಮೂಲಗಳಿಂದ ಮಾಹಿತಿ ಪಡೆದುಕೊಳ್ಳಬೇಡಿ.

ಸಕಲ ಮಾನವಕುಲಕ್ಕೆ ಮಾರ್ಗದರ್ಶನವಾಗಿರುವ ಇಸ್ಲಾಂ ಧರ್ಮದ ಸಂದೇಶವನ್ನು ಕೂಲಂಕುಶವಾಗಿ ಅಧ್ಯಯನ ಮಾಡಿ ಚಿಂತಿಸಬೇಕಾದ ಅಗತ್ಯವಿಲ್ಲವೇ?

